ಸಂದರ್ಶನ

ಪ್ರೀತಿ( ವಾತ್ಸಲ್ಯ) ಮತ್ತು ಶಿಸ್ತಿನ ನಡುವೆ ಸಿಲುಕಿದ ಶಿಕ್ಷಕಿ /ಕ

ಶಿಕ್ಷಕಿ ಶೀಮತಿ ಪ್ರಮೀಳಾ ಚೌಹಾಣರೊಂದಿಗೆ ಟುಲ್‌ಟುಲ್ ಬಿಸ್ವಾಸ್ ಸಂದರ್ಶನ

**ಪ್ರಾಥಮಿಕ ಶಾಲೆಯಲ್ಲಿ ಕಲಿಸುತಿರುವ ಶಿಕ್ಷಕಿಯ ಈ ಸಂದರ್ಶನವು ಸಾಮಾನ್ಯ ವ್ಯಕ್ತಿಯೊಬ್ಬರು ಶಿಕ್ಷಕಿಯಾದ ಹಾದಿಯ ಪಯಣ ಹಾಗೂ ಶಿಕ್ಷ ಕಿಯ ಜೀವನದ ಸಿಹಿ ಮತ್ತು ಕಹಿ ಅನುಭವ, ಜತೆಗೆ ಅವರು ಎದುರಿಸಿದ ಸಮಸ್ಯೆಗಳು ಮತ್ತು ಸವಾಲುಗಳನ್ನು ವಿವರಿಸುತ್ತದೆ. ಸಂ.**

ಹಾಗೆ ನೋಡಿದರೆ ಸಂಜಯಗಾಂಧಿ ವಿದ್ಯಾಲಯವು ಮಾಧ್ಯಮಿಕ (ಪ್ರೌಢ) ಶಾಲೆಯವರೆಗೆ ಇದ್ದರೂ, ಇದರಲ್ಲಿ ಪ್ರಾಥಮಿಕ ಶಾಲೆಯ ಭಾಗವು ಪ್ರತ್ಯೇಕ (ಹಳೆಯ) ಕಟ್ಟಡದಲ್ಲಿ ನಡೆಯುತ್ತದೆ. ಕಟ್ಟಡದಲ್ಲಿ ಎರಡು ಕೊಠಡಿಗಳಿವೆ. ಒಂದು ಕೊಠಡಿಯಲ್ಲಿ ಮೊದಲನೆಯ ತರಗತಿ ಮತ್ತು ಎರಡನೇ ತರಗತಿಯ ವಿದ್ಯಾರ್ಥಿಗಳು ಹಾಗೂ ಮತ್ತೊಂದು ಕೊಠಡಿಯಲ್ಲಿ ಮೂರನೇ ತರಗತಿ ಮತ್ತು ನಾಲ್ಕನೇ ತರಗತಿಯ ವಿದ್ಯಾರ್ಥಿಗಳು ಓದುತ್ತಿದ್ದರು. ಐದನೇ ತರಗತಿಗೆ ಶಾಲೆಯ ಮುಖ್ಯ ಕಟ್ಟಡದ ಒಂದು ಕೊಠಡಿಯನ್ನು ನೀಡಲಾಗಿದೆ. ಐದನೇ ತರಗತಿಯ ಈ ಮಕ್ಕಳೇ ಪ್ರಾಥಮಿಕ ಶಾಲೆಯಲ್ಲಿ ಅತ್ಯಂತ ವಿಶೇಷವಾಗಿದ್ದಾರೆ. ಅಂದಹಾಗೆ, ಇದನ್ನು ಹೀಗೂ ಕೂಡ ನೋಡಬಹುದು. ಅಂದರೆ ಐದನೇ ತರಗತಯು (ಹಾಗೂ ಅದರ ಶಿಕ್ಷಕಿ ಮತ್ತು ಅದರಲ್ಲಿ ಓದುತ್ತಿರುವ ಮಕ್ಕಳು) ವಾಸ್ತವವಾಗಿ ಈ ಶಾಲೆಯ ಆವರಣದಲ್ಲೇ ಇರುವ ಪ್ರಾಥಮಿಕ ಮತ್ತು ಮಾಧ್ಯಮಿಕ (ಪ್ರೌಢ)ಶಾಲೆಗಳ ಎರಡು ಪ್ರತ್ಯೇಕ ಸಂಸ್ಥೆಗಳ ನಡುವಿನ ಸೇತುವೆಯಾಗಿದೆ. (ಪ್ರೌಢ) ಆಕಾರಣಕ್ಕಾಗಿಯೇ ಮಾಧ್ಯಮಿಕಶಾಲೆಗೆ ಹೋಲಿಸಿದರೆ(=ಕೆ ಮಾಡಿದರೆ) ಈ ತರಗತಿಯುಯನ್ನು ಹೊಸದಾದ, ದೊಡ್ಡದಾದ ಮತ್ತು (ಸುಧಾರಿತ=) ಉತ್ತಮಕಟ್ಟಡದಲ್ಲಿ ಇದೆಯೆನಿಸುತ್ತದೆ. (ನಡೆಸಲಾಗುತ್ತದೆ). ಇರಲಿ, ನಾವೀಗ ಪ್ರಾಥಮಿಕ ಶಾಲೆಯ ತರಗತಿಗಳಿಗೆ ಹಿಂತಿರುಗೋಣ. ಒಳಮಾಳಿಗೆಯು ತವರದಿಂದ ರೂಪಿತವಾಗಿದ್ದರೂ ಅದರ ಎರಡೂ ಕೊಠಡಿಗಳು ಚೆನ್ನಾಗಿದ್ದು ಸಾಕಷ್ಟು ವಿಶಾಲವಾಗಿವೆ.ದೆ,. ಸುತ್ತಲೂ ಇರುವ ಬೃಹತ್ ವೃಕ್ಷಗಳ ಕಾರಣದಿಂದಾಗಿ ಮಧ್ಯಾಹ್ನದ ಬಿಸಿಲಿನಲ್ಲಿಯೂ ಕೂಡ ಈ ಕೊಠಡಿಗಳು ನಿರೀಕ್ಷಿಸಿದಷ್ಟು ಬಿಸಿಯಾಗುವುದಿಲ್ಲ. ಎರಡೂ ತರಗತಿಯ ಕೊಠಡಿಗಳಲ್ಲಿ ಅಗಲವಾದ ಮರದ ಬೆಂಚುಗಳು ಮತ್ತು ಡೆಸ್ಕುಗಳ ಎರಡು ಸಾಲುಗಳಿವೆ. ಮೊದಲ ಕೊಠಡಿಯ ಒಂದು ಸಾಲಿನಲ್ಲಿ ಮೂರನೇ ತರಗತಿಯ ಮಕ್ಕಳು ಕುಳಿತುಕೊಂಡರೆ, ಮತ್ತೊಂದರಲ್ಲಿ ನಾಲ್ಕನೇ ತರಗತಿಯ ವಿದ್ಯಾರ್ಥಿಗಳು ಕುಳಿತುಕೊಳ್ಳುತ್ತಾರೆ. ಇದೇ ರೀತಿ ಇನ್ನೊಂದು ಕೊಠಡಿಯ ಒಂದು ಸಾಲಿನಲ್ಲಿ ಮೊದಲನೇ ತರಗತಿಯ ಮಕ್ಕಳು ಕುಳಿತುಕೊಂಡರೆ, ಮತ್ತೊಂದರಲ್ಲಿ ಎರಡನೇ ತರಗತಿಯ ವಿದ್ಯಾರ್ಥಿಗಳು ಕುಳಿತುಕೊಳ್ಳುತ್ತಾರೆ.

ನಾನು ಮೊದಲ ದಿನ ಇವರನ್ನು ಕಾಣಲು(= ಸಂಪರ್ಕಕ್ಕಾಗಿ) ಇಲ್ಲಿಗೆ ಬಂದಿದ್ದಾಗ ಪೌಢಶಾಲೆಯ ಕಚೇರಿಯಲ್ಲಿ ಪ್ರಾಂಶುಪಾಲರ (ಕಲ್ಪನಾ ದೇಸಾಯಿ) ಭೇಟಿಯಾಯಿತು. ಅವರು ನನ್ನನ್ನು ತುಂಬ ಆದರದಿಂದ ಕುಳ್ಳಿರಿಸಿ ಮಾತನಾಡಿಸಿದರು. ಏಕಲವ್ಯ ಮತ್ತು ಚಕ್‌ಮಕ್ ಬಗ್ಗೆ ಅವರಿಗೆ ತಿಳಿದಿತ್ತು, ಹೀಗಾಗಿ ಶೈಕ್ಷಣಿಕ ನಿಯತಕಾಲಿಕೆಯೊಂದರಲ್ಲಿ ಶಿಕ್ಷಕರ ಸಂದರ್ಶನದ ವಿಷಯ ತಿಳಿದು ಅವರಿಗೆ ತುಂಬ ಸಂತೋಷವಾಯಿತು. ಆದರೆ ಸಮಯಾವಕಾಶದ ಕೊರತೆಯ ಬಗ್ಗೆ ಹೇಳುತ್ತಾ ಅವರು ನನಗೆ ಎರಡು ಹೆಸರುಗಳನ್ನು ಹೇಳಿದರು- ಶ್ರೀ ಮಹೇಶ್ ಅಗರ್ವಾಲ್ ಮತ್ತು ಶ್ರೀಮತಿ ಪ್ರಮೀಳಾ ಚೌಹಾಣ್. ಅಗರ್ವಾಲ್ ಅವರು ಯಾವುದೋ ಕೆಲಸದ ಹಿನ್ನೆಲೆಯಲ್ಲಿ ಶಾಲೆಯಿಂದ ಹೊರಗಿದ್ದರು. ಹೀಗಾಗಿ ಅವರು ಒಬ್ಬ ಹುಡುಗನನ್ನು ಕರೆದು ನನ್ನನ್ನು ಚೌಹಾಣ್ ಮೇಡಂ ಬಳಿಗೆ ಕರೆದೊಯ್ಯಲು ಹೇಳಿದರು. ನನ್ನನ್ನು ಕರೆದೊಯ್ಯುತ್ತಿದ್ದ ಹುಡುಗನ ಜತೆಗೆ ಸುಲಭವಾಗಿ(=ಅಚಾನಕ್ಕಾಗಿ) ಮಾತುಕತೆ ಶುರುವಾಯಿತು. ಎಂಟನೇ ತರಗತಿಯ ಮಕ್ಕಳಿಗೆ ಬೀಳ್ಕೊಡುಗೆ ಇರುವ ವಿಚಾರವನ್ನು ತಿಳಿಸಿದ. ಇದೇ ಕಾರಣಕ್ಕಾಗಿ ಅವನೂ ಅವನ ಮಿತ್ರರೂ (ಎಲ್ಲರೂ ಏಳನೇ ತರಗತಿಯ ಮಕ್ಕಳು) ಶಾಲೆಗೆ

ಬೇಗನೇ ಬಂದಿದ್ದರು ಹಾಗೂ ಸಿದ್ಧತೆಯಲ್ಲಿ ತೊಡಗಿಸಿಕೊಂಡಿದ್ದರು. ನಾವು ಶಾಲೆಯ ಕಟ್ಟಡದಿಂದ ಹೊರ ಬಂದು ಪಕ್ಕದ ಕಿರಿದಾದ ಬೀದಿಯ ಮೂಲಕ ಸಾಗಿ ಪ್ರಾಥಮಿಕ ಶಾಲೆಯ ಕೊಠಡಿಗಳನ್ನು ತಲುಪಿದೆವು.

ಆ ಬಾಲಕನು ನನ್ನನ್ನು ಮೊದಲನೆಯ ಕೊಠಡಿಯ ಹೊಸ್ತಿಲಿನಲ್ಲಿ ಬಿಟ್ಟು ಹೊರಟುಹೋದ.ನು. ಕೊಠಡಿಯಲ್ಲಿ ಕುಳಿತಿದ್ದ ಮೂವರು ಶಿಕ್ಷಕಿಯರು ಪರಸ್ಪರ ಮಾತುಕತೆಯಲ್ಲಿ ತೊಡಗಿದ್ದರು. ಜತೆಗೆ ಕೆಲವು (ಪ್ರತಿ) ಕಾಪಿ ಪುಸ್ತಕಗಳನ್ನು ಪರಿಶೀಲಿಸುತ್ತಿದ್ದರು. ಇನ್ನೊಬ್ಬರು ರಿಜಿಸ್ಟರ್‌ನಲ್ಲಿ ಯಾವುದೋ ಮಾಹಿತಿಯನ್ನು ಭರ್ತಿ ಮಾಡುತ್ತಿದ್ದರು. ವಿಚಾರಿಸಿದಾಗ ರಿಜಿಸ್ಟರ್ ಕೆಲಸ ಮಾಡುತ್ತಿದ್ದವರೇ ಚೌಹಾಣ್ ಮೇಡಂ ಎಂದು ತಿಳಿಯಿತು. ನಾನು ನನ್ನ ಪರಿಚಯ ಹೇಳಿಕೊಂಡೆ. (ಏಕಲವ್ಯ ಹಾಗೂ ಚಕ್‌ಮಕ್ ಇಲ್ಲಿ ಕೂಡ ಪ್ರಮುಖವಾಗಿ ಪರಿಚಯಕ್ಕೆ ಪೂರಕವಾಯಿತು). ಜತೆಗೆ ಪತ್ರಿಕೆ ಮತ್ತು ಶಿಕ್ಷಕರ ಸಂದರ್ಶನದ ಕುರಿತು ತಿಳಿಸಿದೆ. ಅವರು ನನ್ನನ್ನು ಕೂರಿಸಿಕೊಂಡು ಸವಿವರವಾಗಿ ಮಾತುಕತೆ ನಡೆಸಿದರು. ತಮ್ಮ ಬಾಲ್ಯ, ವಿದ್ಯಾಭ್ಯಾಸ, ಕೆಲಸ, ಜೀವನದ ಕುರಿತು ಸಹಜವಾಗಿಯೇ ಮಾತನಾಡಿದರು. ನಡು ನಡುವೆ ಮಕ್ಕಳ ಗಲಾಟೆ ಕೇಳಿಸಿದಾಗ ಅದನ್ನು ತಡೆಯಲು ಒಂದಿಷ್ಟು ಗದರುವುದನ್ನೂ ಮಾಡುತ್ತಿದ್ದರು. ಮಾತಿನ ನಡುವೆ ಅವರು ತಾವು ಮಾತನಾಡುವುದಕ್ಕಿಂತಲೂ ಬರೆಯುವ ಮೂಲಕ ತಮ್ಮ ವಿಚಾರಗಳನ್ನು ಚೆನ್ನಾಗಿ ಅಭಿವ್ಯಕ್ತಿ ಮಾಡಲು ತಮಗೆ ಸಾಧ್ಯವಾಗುತ್ತದೆ, ಅದಕ್ಕಾಗಿ ಅವರಿಗೆ ಕೆಲವು ಪ್ರಶ್ನೆಗಳನ್ನು ಕೊಟ್ಟರೆ ಅವುಗಳಿಗೆ ಸಾಕಷ್ಟು ಯೋಚನೆ ಮಾಡಿ ಲಿಖಿತವಾಗಿ ಉತ್ತರಿಸಲು ಸಾಧ್ಯ ಎಂದು ಹೇಳಿದರು. ಹಾಗಾಗಿ (=ಆದ್ದರಿಂದ) ಈ ಸಂದರ್ಶನದ ಬಹಳಷ್ಟನ್ನು ಪ್ರಮೀಳಾ ಅವರ ಜತೆಗಿನ ಮಾತುಕತೆಯ ಮೂಲಕ ಮತ್ತು ಅವರು ನೀಡಿದ ಕೆಲವು ಲಿಖಿತ ಉತ್ತರಗಳ ಮೂಲಕ ಹೆಣೆಯಲಾಗಿದೆ. ಇದೊಂದುವಿಶಿಷ್ಟ ಶಿಕ್ಷಕಿಯ ಸಂದರ್ಶನ. ಇದರಲ್ಲಿ ನಾನು ಈ ಶಿಕ್ಷಕಿಗೆ ಮಕ್ಕಳ ಬಗ್ಗೆ ಇರುವ ಪ್ರೀತಿ ಮತ್ತು ಕಾಳಜಿಯನ್ನು ನೋಡಿದ್ದೇನೆ, ಜತೆಗೆ ಅವರನ್ನು ಶಿಸ್ತಿಗೆ ಒಳಪಡಿಸಲು ಅವರ ತೀವ್ರ ಹೆಣಗಾಟವನ್ನೂ (ಸಂಘರ್ಷವನ್ನೂ) ಕಂಡಿದ್ದೇನೆ.

**ಪ್ರಶ್ನೆ: ನಿ ಮ್ಮ ಬಾಲ್ಯ ಹಾಗೂ ಓದು ಬರಹದ ಬಗ್ಗೆ ಒಂದಿಷ್ಟು ವಿವರಿಸಬಹುದೆ.**

ಪ್ರಮೀಳಾ : ನಾನು ಜನಿಸಿದ್ದು ನಾಗಪುರದ ಒಂದು ದೊಡ್ಡ ಕುಟುಂಬದಲ್ಲಿ. ಕುಟುಂಬದಲ್ಲಿ ಎಲ್ಲ ಸುಖ ಸೌಲಭ್ಯಗಳು ಇದ್ದುವು. ನನ್ನ ಲಾಲನೆ ಪಾಲನೆ ಶ್ರೀಮಂತ ಕುಟುಂಬದಲ್ಲಿ ಆಗಿತ್ತು. ನನ್ನ ಪ್ರಾಥಮಿಕ ಶಿಕ್ಷಣವು ಮಿಷನರಿ ಶಾಲೆಯಲ್ಲಿ ಆಗಿತ್ತು. ಶಾಲೆಯು ತುಂಬಾನೇ ಶಿಸ್ತಿನಿಂದ ಕೂಡಿತ್ತು. ಅಧ್ಯಯನದ ಕಡೆ ಹೆಚ್ಚಿನ ಗಮನ ನೀಡಲಾಗುತ್ತಿತ್ತು. ಸಾಕಷ್ಟು ಹೋಮ್ ವರ್ಕ್ ನೀಡಲಾಗುತ್ತಿತ್ತು. ನಮ್ಮ ಕಾಲದಲ್ಲಿ ನೈತಿಕ ಶಿಕ್ಷಣಕ್ಕೂ ಒಂದು ಪೀರಿಯಡ್ ಇರುತ್ತಿತ್ತು. ತರಗತಿಯಲ್ಲಿ ಸಂಪೂರ್ಣ ನಿಶ್ಯಬ್ದತೆ (= ಶಾಂತಿ) (ನೆಲೆಸಿ)ಇರುತ್ತಿತ್ತು. ನನ್ನ ಇಂಗ್ಲಿಷ್ ಮೊದಲಿನಿಂದಲೂ ಚೆನ್ನಾಗಿತ್ತು.

ಸುಮಾರು 40 ವರ್ಷಗಳ ಹಿಂದೆ ನನ್ನ ವಿವಾಹವಾದ ಮೇಲೆ ನಾನು ಮಹಾರಾಷ್ಟ್ರದಿಂದ ಭೋಪಾಲಕ್ಕೆ ಸಮೀಪದ ಹಳ್ಳಿಗೆ ಬಂದೆ. ಅಲ್ಲಿಯ ವಾತಾವರಣವು ಸಂಪೂರ್ಣವಾಗಿ ಭಿನ್ನವಾಗಿತ್ತು. ಅತ್ತೆ ಮನೆ ಇದ್ದಿದ್ದು ಹಳ್ಳಿಯಲ್ಲಿ ಹಾಗೂ ನಾನು ಬೆಳೆದಿದ್ದು ನಾಗ್ಪುರ ನಗರದಲ್ಲಿ. ನನ್ನ ಕುಟುಂಬವು ವ್ಯಾಪಾರದಲ್ಲಿ ತೊಡಗಿಸಿಕೊಂಡಿತ್ತು. ಆದರೆ ನನ್ನ ಅತ್ತೆ ಮನೆಯಲ್ಲಿ ಕೃಷಿ ಕಾರ್ಯಗಳು ನಡೆಯುತ್ತಿದ್ದವು. ಎಲ್ಲವೂ ವಿಭಿನ್ನವಾಗಿತ್ತು. ಇಲ್ಲಿಯವರಿಗೆ ಓದು ಬರಹದ ಪ್ರಾಮುಖ್ಯತೆ ಎಷ್ಟೆಂಬುದು ಹೆಚ್ಚು ಗೊತ್ತಿರಲಿಲ್ಲ.. ಎಲ್ಲದರಲ್ಲೂ 'ಪಟೇಲರ ಸೊಸೆ' ಎನ್ನುವ ಹೊಣೆಗಾರಿಕೆಯನ್ನು ನಿಭಾಯಿಸಬೇಕಾಗುತ್ತಿತ್ತು.. ಆ ಸಮಯದಲ್ಲಿ ನಾನು ತುಂಬಾ ಹೆಣಗಾಡಿದ್ದೆ. ಮುಂದೆ ಇನ್ನಷ್ಟು ಓದುವ ನನ್ನ ಆಸಕ್ತಿ ಮತ್ತು ಶಿಕ್ಷಕಿಯಾಗುವ ಇಚ್ಛೆಗೆ ಇಲ್ಲಿ ತುಂಬ ಬೆಲೆ ಇರಲಿಲ್ಲ, ಆದರೆ ನನ್ನ ಪತಿ ಯಾವಾಗಲೂ ನನಗೆ ಸಹಾಯ ಮಾಡುತ್ತಿದ್ದರು. ನನಗೆ ಸಹಕಾರ ನೀಡುತ್ತಿದ್ದರು. ಅವರು ಶಿಕ್ಷಣ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದರು. ಕೆಲ ಕಾಲದ ನಂತರ ನಾವು ಭೋಪಾಲ್ ನಗರಕ್ಕೆ ಬಂದೆವು.

**ಪ್ರಶ್ನೆ: ನೀವು ಶಿಕ್ಷಕಿಯೇಕಾದಿರಿ? ಹೇಗಾದಿರಿ? ಇದಕ್ಕೂ ಮುನ್ನ ನೀವು ಬೇರೇನಾದರೂ ಕೆಲಸವನ್ನೂ ಮಾಡಿರುವಿರೇ?**

ಪ್ರಮೀಳಾ: ನನಗೆ ಶಿಕ್ಷಕಿಯಾಗಬೇಕು ಎನ್ನುವ ಇಚ್ಛೆ ಮೊದಲಿನಿಂದಲೂ ಅಂದರೆ ಮದುವೆ ಆಗುವುದಕ್ಕಿಂತ ಹಿಂದಿನಿಂದಲೂ ಇತ್ತು. ಆರಂಭದಿಂದಲೂ ನನಗೆ ಕಲಿಸುವ ಆಸಕ್ತಿ ಇತ್ತು. ಮದುವೆಯ ನಂತರ ನಾನು ಬಹಳ ಕಷ್ಟಪಡಬೇಕಾಯಿತು.

ಒಂದೂವರೆ ಎರಡು ವರ್ಷಗಳ ಅಂತರದಲ್ಲಿ ನನಗೆ ನಾಲ್ಕು ಮಕ್ಕಳಾದವು.ರು. ನಾಲ್ಕು ಸಣ್ಣ ಸಣ್ಣ ಮಕ್ಕಳನ್ನು ಸಂಭಾಳಿಸಬೇಕಿತ್ತು. ಮನೆಯಲ್ಲಿ ಒಬ್ಬರ ಆದಾಯವಷ್ಟೇ ಇತ್ತು. ನಮ್ಮದು ದೊಡ್ಡ ಕುಟುಂಬವಾಗಿತ್ತು. ಮಕ್ಕಳು ದೊಡ್ಡವರಾಗುತ್ತಿದ್ದಂತೆ ಅವರ ಶಿಕ್ಷಣದ ವೆಚ್ಚವೂ ಸೇರಿದಂತೆ ಬಹಳಷ್ಟು (ಸಮಸ್ಯೆ) ಕಷ್ಟಗಳ ನಡುವೆ ದಿನದೂಡುತ್ತಿದ್ದೆವು. ಮದುವೆಯಾಗಿ ಹಲವು ವರ್ಷಗಳ ಬಳಿಕ ನನ್ನ ಮಕ್ಕಳು ಸ್ವಲ್ಪ ದೊಡ್ಡವರಾದಮೇಲೆ , ನಾನು ಅಧ್ಯಾಪನ ವೃತ್ತಿಯನ್ನು ಹಿಡಿದೆ. ನನಗೆ ಅವಶ್ಯಕತೆಯೂ ಇತ್ತು. ಅವಕಾಶವೂ ಸಿಕ್ಕಿತು. ಹೀಗೆ ನಾನು ಶಿಕ್ಷಕಿಯಾದೆ. ನನಗೆ ಬಹಳ ಸಂತೋಷವಾಗಿತ್ತು. ಅದೃಷ್ಟ ನನ್ನ ಕೈಹಿಡಿದಿತ್ತು. ಆದರೆ ಅದು ಸುಲಭವಾಗಿರಲಿಲ್ಲ. ಬಹಳ ಪ್ರಯತ್ನದ ನಂತರ, ನನಗೆ ನೆನಪಿರುವಂತೆ 1982 ರಲ್ಲಿ ನಾನು ಶಿಕ್ಷಕಿಯಾಗಿ ಆಯ್ಕೆಯಾದೆ. ಅದಕ್ಕೂ ಮೊದಲು ಮನೆಯಿಂದಾಚೆ ನಾನು ಯಾವುದೇ ಕೆಲಸ ಮಾಡಿರಲಿಲ್ಲ. ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಸಿಕ್ಕಿರುವುದಕ್ಕೆ ನಾನು ದೇವರಿಗೆ ತುಂಬ ತುಂಬ ಕೃತಜ್ಞತೆ ಸಲ್ಲಿಸಿದ್ದೆ. ನನ್ನ ಜೀವನದಲ್ಲಿ ಅಚಾನಕ್ಕಾಗಿ ಒಂದು ದೊಡ್ಡ ಪರಿವರ್ತನೆ ಆಗಿತ್ತು.

**ಪ್ರಶ್ನೆ: ಶಾಲೆಯಲ್ಲಿ ಕಲಿಸುವ ಸಂದರ್ಭದಲ್ಲಿ ಎದುರಾದ ಒಂದಿಷ್ಟು ಸಿಹಿ ಮತ್ತು ಕಹಿ ಅನುಭವಗಳು ನಿಮಗೆ ನೆನಪಿದೆಯೇ?**

ಪ್ರಮೀಳಾ- ಶಿಕ್ಷಣ ಇಲಾಖೆಗೆ ಸೇರಿಕೊಂಡ ಬಳಿಕ 82ರಿಂದ 84ರವರೆಗೆ ನಾನು ತರಬೇತಿ ಪಡೆದೆ. 85 ರಲ್ಲಿ ನೀಲ್‌ಬಡ್‌ನಲ್ಲಿ ನನ್ನ ನೇಮಕಾತಿ ಆಯಿತು. ಕೆಲವು ವರ್ಷಗಳ ಕಾಲ ನಾನು ನೀಲ್‌ಬಡ್ ಆಚೆ ಇರುವ ಹಳ್ಳಿಯಲ್ಲಿ ಕಲಿಸಿದೆ. ಅಲ್ಲಿ ಪ್ರಾಥಮಿಕ ಹಾಗೂ ಮಾಧ್ಯಮಿಕಶಾಲೆಗಳೆರಡೂ ಇದ್ದವು. ಆರಂಭದಲ್ಲಿ ನಾನು ಅನೇಕ ತೊಂದರೆಗಳನ್ನು ಎದುರಿಸಿದೆ. ಕೆಲ ವರ್ಷಗಳ ನಂತರ ಆ ಕಷ್ಟಗಳು ದೂರವಾದವು.

85 ಅಥವಾ 86 ರಲ್ಲಿ ನಾನು ಸೆಕ್ಯುರಿಟಿ ಲೈನಿನ ಶಾಲೆಗೆ ಬಂದೆ. ಅಲ್ಲಿ ನನಗೆ ಮಾಧ್ಯಮಿಕ ಶಾಲೆ ಸಿಕ್ಕಿತ್ತು. ಮಾಧ್ಯಮಿಕ ಶಾಲೆಯಲ್ಲಿ ನಾನು ಆರನೇ ಹಾಗೂ ಏಳನೇ ತರಗತಿಗೆ ಕಲಿಸುತ್ತಿದ್ದೆ. ಆ ವೇಳೆ ನನಗೆ ಸಮಾಜ ಶಾಸ್ತ್ರ ಮತ್ತು ಹಿಂದಿ ವಿಷಯ ಸಿಕ್ಕಿತ್ತು. ಆ ಎರಡೂ ವಿಷಯಗಳನ್ನೂ ನಾನು ಬೋಧಿಸಿದೆ. ಎಂಟನೇ ತರಗತಿಯನ್ನು ತೆಗೆದುಕೊಂಡಿರಲಿಲ್ಲ, ಬದಲಿಗೆ ಕೇವಲ ಆರನೇ ಹಾಗೂ ಏಳನೇ ತರಗತಿಯನ್ನು ತೆಗೆದುಕೊಳ್ಳುತ್ತಿದ್ದೆ. ಅಲ್ಲಿನ ವಿದ್ಯಾರ್ಥಿಗಳ ಶಿಸ್ತು ಬಹಳ ಚೆನ್ನಾಗಿತ್ತು. ನಮ್ಮ ಮುಖ್ಯೋಪಾಧ್ಯಾಯಿನಿ ತುಂಬ ಒಳ್ಳೆಯವರಿದ್ದರು. ಬಹಳ ಶಿಸ್ತಿನ ವ್ಯಕ್ತಿಯಾಗಿದ್ದರು. ಸಮಯಕ್ಕೆ ಸರಿಯಾಗಿ ಬರುತ್ತಿದ್ದರು, ಸಮಯಕ್ಕೆ ಸರಿಯಾಗಿ ಹೋಗುತ್ತಿದ್ದರು. ಅವರು ಯಾವಾಗಲೂ ರೌಂಡ್ಸ್ ಬರುತ್ತಿದ್ದರು ಮತ್ತು ಪರಿಶೀಲನೆ ನಡೆಸುತ್ತಿದ್ದರು.

ನಮ್ಮಲ್ಲಿ ಒಬ್ಬರು ಇಂಗ್ಲಿಷ್ ಮೇಡಂ ಇದ್ದರು. ಜೋಷಿ ಮೇಡಂ ಅಂತ. ಅವರು ನಿವೃತ್ತರಾದರು. ಅವರ ನಿವೃತ್ತಿಯ ನಂತರ ಆ ವಿಷಯವು ನನಗೆ ಸಿಕ್ಕಿತು. ನನ್ನ ಸೇವಾವಧಿಯ ಹತ್ತು ವರ್ಷಗಳು ಉರುಳಿದ ನಂತರ ನನಗೆ ಇಂಗ್ಲಿಷ್ ಕಲಿಸುವ ಅವಕಾಶ ಸಿಕ್ಕಿತ್ತು. ನಾನು ಮಹಾರಾಷ್ಟ್ರದಲ್ಲಿ ಕಲಿತಿದ್ದರಿಂದ ನನ್ನ ಇಂಗ್ಲಿಷ್ ಚೆನ್ನಾಗಿತ್ತು. ಹಾಗೂ ನಾನು ಕಟ್ಟುನಿಟ್ಟಾಗಿ ಇರುತ್ತಿದ್ದುದರಿಂದ ಮಕ್ಕಳು ನನಗೆ ಒಂದಿಷ್ಟು ಹೆದರುತ್ತಿದ್ದರು.

ನಮ್ಮ ಶಾಲೆಗೆ ಸಂಭಾವಿತ, ಸುಶಿಕ್ಷಿತರ ಮನೆಯ ಮಕ್ಕಳು, ಕ್ವಾರ್ಟರ್ಸ್‌ನ ಮಕ್ಕಳು ಮತ್ತು ಅಣ್ಣಾನಗರದ ಸ್ಲಮ್‌ನ ಮಕ್ಕಳು ಕೂಡ ಬರುತ್ತಿದ್ದರು. ಅವರಿಗೆ ಇಂಗ್ಲಿಷ್ ತುಂಬ ಕಷ್ಟವಾಗುತ್ತಿತ್ತು. ಅವರಿಗೆ ಇಂಗ್ಲಿಷಿನ ಪ್ರಶ್ನೋತ್ತರ, ಅಕ್ಷರ ಇತ್ಯಾದಿಗಳನ್ನು ನೆನೆಪಿಟ್ಟುಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಮಕ್ಕಳು ಎಲ್ಲಿ ಎಡವುತ್ತಿದ್ದಾರೆ ಎಂದು ಬಳಿಕ ನಾನು ಗಮನಿಸಿದೆ. ಈ ಸಮಸ್ಯೆ ಪರಿಹರಿಸಲು ಇವರಿಗೇಕೆ ಶಾರ್ಟ್‌ಕಟ್ ಹೇಳಿಕೊಡಬಾರದು ಎಂಬ ವಿಚಾರ ನನ್ನ ಮನದಲ್ಲಿ ಹೊಳೆಯಿತು. ಅವರಿಗೆ ನಾನು ಮೊದಲಿಗೆ ಹು, ವಾಟ್, ವೆನ್, ವೇರ್ ಇವುಗಳ ಅರ್ಥಗಳನ್ನು, ಅವುಗಳನ್ನು ಯಾವಾಗ ಬಳಸಬೇಕೆಂದು ತಿಳಿಹೇಳಿದೆ. ಅವುಗಳ ಪ್ರಶ್ನೆಗಳಿಗೆ ಉತ್ತರಗಳೂ ಸರಳವಾಗಿದ್ದವು. ವೇರ್ ಅಥವಾ ಎಲ್ಲಿ - ಇದಕ್ಕೆ ಸ್ಥಳದ ಹೆಸರನ್ನು ಬರೆಯಬೇಕು. ವೆನ್ ಅಥವಾ ಯಾವಾಗ- ಇದಕ್ಕೆ ಸಮಯವನ್ನು ಬರೆಯಬೇಕು. ವೈ ಅಂದರೆ ಏಕೆ -ಇದರ ಉತ್ತರವು ಕಷ್ಟಕರವಾಗುತ್ತಿತ್ತು. ಹೀಗಾಗಿ ಅವರಿಗೆ ಅದನ್ನು ಮಾಡಲಾಗುತ್ತಿರಲಿಲ್ಲ. ಹಾಗೂ ವಾಟ್ ಅಂದರೆ ಏನು-ಇದಕ್ಕೆ ಏನು ಉತ್ತರ ಬರೆಯುವುದು. ಹು ಅಂದರೆ ಯಾರು-ಇದಕ್ಕೆ ಹೆಸರನ್ನು ಉತ್ತರವಾಗಿ ಬರೆಯಬೇಕು. ಎಲ್ಲಕ್ಕಿಂತ ಮೊದಲಿಗೆ ಹೆಸರು ಬರೆಯಬೇಕು ಮತ್ತು ಬಾಕಿ

ಉಳಿದ ವಾಕ್ಯ ಅದರಲ್ಲೇ ಇರುತ್ತದೆ. ಇಂಥ ಮೂರು ನಾಲ್ಕು ವಿಷಯಗಳ ಬಗ್ಗೆ ನಾನು ಬಹಳಷ್ಟು ಗಮನ ಹರಿಸಿದೆ. ಹೀಗಾಗಿ ಮಕ್ಕಳೂ ಕೂಡ ಸಾಕಷ್ಟು ಗಮನಕೊಟ್ಟರು. ಆದ್ದರಿಂದ ಅವರಿಗದು ಅರ್ಥವೂ ಆಯಿತು.ಕ್ರಮೇಣ ಅವರು ಪ್ರೊಶ್ನೋತ್ತರವನ್ನು ನೆನಪಿಟ್ಟುಕೊಳ್ಳುವುದನ್ನು ಕಲಿತುಬಿಟ್ಟರು.

ಬಳಿಕ ನಾನು ಅವರಿಗೆ ಯಾವುದು ಸುಲಭವಾಗಿತ್ತೋ ಅಂಥ ಪ್ರಬಂಧಗಳನ್ನು ನೆನೆಪಿಟ್ಟುಕೊಳ್ಳಲು ಕಲಿಸುತ್ತಿದ್ದೆ. ತದನಂತರ ಅವರಿಗೆ ಪತ್ರ ಬರೆಯುವುದು ಮತ್ತು ಸರಳ ವ್ಯಾಕರಣ(= ಗ್ರಾಮರ್) ಕಲಿಸಿದೆ. ಮಕ್ಕಳ ಹಿಂದೆ ಹೋಗಿ ಅದನ್ನು ಓದಿ ಕಲಿಸಿಕೊಟ್ಟೆ. ಅವರಿಗೆ ಮೂರು ಪ್ರಬಂಧಗಳನ್ನು ಕಡ್ಡಾಯವಾಗಿ ನೆನಪಿಟ್ಟುಕೊ ಳ್ಳುವಂತೆ ಮಾಡುತ್ತಿದ್ದೆ. ಸಿಕ್‌ನೆಸ್ ಲೆಟರ್, ಮ್ಯಾರೇಜ್ ಲೆಟರ್ ಇಂಥ ಮೂರು ಪತ್ರಗಳಿರುತ್ತಿದ್ದವು. ಇದಲ್ಲದೆ ಗ್ರಾಮರ್‌ನಲ್ಲಿ ಪ್ರಿಪೊ ಜಿ(ಸಿ)ಷನ್, ಜೋಡಿಸಲು ಬಳಕೆಯಾಗುವ ಕಂಜಂಕ್ಷನ್ ಇನ್ನೂ ಮುಂತಾದ ವಿಷಯಗಳನ್ನು ನೆನಪಿಟ್ಟುಕೊ ಳ್ಳುವಂತೆ ಮಾಡುತ್ತಿದ್ದೆ.

ಈ ರೀತಿ ಮಾಡತೊಡಗಿದ ಮೇಲೆ ಮಕ್ಕಳಲ್ಲಿ ಆತ್ಮವಿಶ್ವಾಸ ಮೂಡಲಾರಂಭಿಸಿತ್ತು. ಇದರಿಂದಾಗಿ ನನ್ನ ಫಲಿತಾಂಶವು ಎಷ್ಟು ಸುಧಾರಣೆಯಾಗತೊಡಗಿತು ಎಂದರೆ ಬಹಳಷ್ಟು ಮಕ್ಕಳು ಅಂದರೆ 100 ರಲ್ಲಿ 80 ಮಕ್ಕಳು ಉತ್ತೀರ್ಣರಾದರು.. ಇದನ್ನು ನೋಡಿ ನಮ್ಮ ಮುಖ್ಯೋಪಾಧ್ಯಾಯರಿಗೂ ತುಂಬ ಸಂತೋಷವಾಗಿತ್ತು. ಮೇಡಂ, ನೀವು ತುಂಬ ಚೆನ್ನಾಗಿ ಇಂಗ್ಲೀಷ್ ಕಲಿಸುತ್ತೀರಿ ಎಂದು ಅವರು ಹೇಳುತ್ತಿದ್ದರು. ಆಕಸ್ಮಿಕವಾಗಿ ನನಗೊಂದು ಅಪಘಾತವಾಯಿತು. ನನ್ನ ಮನೆಯಿಂದ ಶಾಲೆ ತುಂಬ ದೂರವಿದ್ದ ಕಾರಣ ನಾನು ನನ್ನ ಮನೆಗೆ ಸಮೀಪದ ಈ ಶಾಲೆಗೆ ವರ್ಗಾವಣೆಯನ್ನು ತೆಗೆದುಕೊಂಡೆ. ನನ್ನ ಮುಖ್ಯೋಪಾಧ್ಯಾಯರು ನನ್ನನ್ನು ಹೋಗದಂತೆ ಬಹಳ ತಡೆದರೂ ನನಗೆ ಬೇರೆ ಉಪಾಯವಿರಲಿಲ್ಲ. 2003 ರಲ್ಲಿ ನಾನು ಸಂಜಯ ಗಾಂಧಿ ಸರಕಾರಿ ಶಾಲೆಗೆ ಬಂದೆ. ಇಲ್ಲಿ ನನಗೆ ಪ್ರಾಥಮಿಕ ವಿಭಾಗ ಸಿಕ್ಕಿತು. ಆರಂಭದಲ್ಲಿ ನಾನು ಐದನೇ ತರಗತಿಗೆ ಕಲಿಸುತ್ತಿದ್ದೆ. ನಾನು ಮಕ್ಕಳನ್ನು ಶಿಸ್ತಿಗೊಳಪಡಿಸಿದೆ. ಮಕ್ಕಳು ನನ್ನ ಮಾತು ಕೇಳುತ್ತಿದ್ದರು ಹಾಗೂ ಹೆದರುತ್ತಲೂ ಇದ್ದರು. ಉತ್ತಮ ಫಲಿತಾಂಶವೂ ಬಂತು. ಹೀಗೆ ನನ್ನ 33 ವರ್ಷಗಳ ಅಧ್ಯಾಪನವು ಸಾಕಷ್ಟು ಚೆನ್ನಾಗಿತ್ತು.

**ಪ್ರಶ್ನೆ: ನಿಮಗೆ ಸೆಕ್ಯುರಿಟಿ ಲೈನ್‌ನ ಮಕ್ಕಳು ನೆನಪಾಗಾಗುತ್ತಾರಾ? ಯಾವ ಮಗು ನಿಮಗೆ ನೆನಪಾಗುತ್ತಾರೆ ಮತ್ತು ಏಕೆ?**

ಪ್ರಮೀಳಾ: ಆ ಮಕ್ಕಳು ನನಗೆ ಏಕೆ ನೆನಪಾಗುತ್ತಾರೆ ಅಂದರೆ ಅವರೆಲ್ಲ ನನ್ನನ್ನು ತುಂಬ ಹಚ್ಚಿಕೊಂಡಿದ್ದರು. ಈ ಬಾಂಧವ್ಯದ ಜೊತೆಜೊತೆಗೆ, ಅವರು ನನ್ನಿಂದ ಬಹಳಷ್ಟು ಪ್ರೋತ್ಸಾಹಿತರಾಗಿದ್ದರು ಹಾಗೂ ಇನ್ನೊಂದೆಡೆ ಅವರು ನನ್ನನ್ನು ಕೂಡ ಪ್ರೋತ್ಸಾಹಿಸುತ್ತಿದ್ದರು. ಮೇಡಂ, ನೀವು ತುಂಬ ಚೆನ್ನಾಗಿ ಕಲಿಸಿದ್ದೀರಿ ಹಾಗೂ ನೀವು ಸದಾ ನಮಗೆ ನೆನಪಾಗುತ್ತಿರುತ್ತೀರಿ ಎನ್ನುತ್ತಿದ್ದರು. ಈಗಲೂ ಆ ಮಕ್ಕಳು ಎಲ್ಲಾದರೂ ಒಂದೆಡೆ ಭೇಟಿಯಾದಾಗ ನನ್ನ ಪಾದ ಮುಟ್ಟಿ, ನೆನಪಿಸಿಕೊಳ್ಳುತ್ತಾರೆ.

ಅಪಘಾತದ ಬಳಿಕ ನಾನು ಇಲ್ಲಿಗೆ ಬಂದಾಗ ಅಲ್ಲಿನ ಮುಖ್ಯೋಪಾಧ್ಯಾಯರಂತೂ, ಇಲ್ಲ ಮೇಡಂ, ನಿಮ್ಮನ್ನು ಹೋಗಲು ನಾವು ಬಿಡುವುದಿಲ್ಲ ಎಂದೆಲ್ಲ ಹೇಳಿ ಆ ಶಾಲೆ ಬಿಡದಂತೆ ಬಹಳಷ್ಟು ಆಗ್ರಹಿಸಿದ್ದರು. ನಾನು ಹೇಳಿದ್ದೆ, ಸರ್ ನಾನು ಕೂಡ ತುಂಬ ಅನಿವಾರ್ಯವಾಗಿ ಹೋಗುತ್ತಿದ್ದೇನೆ. ಏಕೆಂದರೆ ಮೊದಲಿನ ಹಾಗೆ ಎರಡೆರಡು ಮಿನಿ ಬಸ್ ಬದಲಿಸಿ ಬರುವುದು ಹಾಗೂ ಅದರ ನಡುವೆ ಇಷ್ಟೊಂದು ನಡೆಯುವುದು ನನ್ನಿಂದ ಸಾಧ್ಯವಾಗುತ್ತಿಲ್ಲ. ಹೀಗಾಗಿಯೇ ನನ್ನ ವರ್ಗಾವಣೆ ನನ್ನ ಮನೆ ಸಮೀಪವೇ ಇರುವ ಈ ಶಾಲೆಗೆ ಆಗಿತ್ತು. ಅದಕ್ಕಾಗಿಯೇ ನಾನು ಈ ಶಾಲೆಗೆ ಸೇರಿಕೊಂಡಿದ್ದೆ. ಆ ಶಾಲೆಯಲ್ಲಂತೂ ಕೊನೆಯ ದಿನ ಸಿಬ್ಬಂದಿ ಸಹಿತ ಎಲ್ಲರೂ ಭಾವುಕರಾಗಿದ್ದರು. ಈಗಲೂ ಅಲ್ಲಿನ ಎಲ್ಲ ಸಿಬ್ಬಂದಿ ನನ್ನನ್ನು ನೆನಪಿಸಿಕೊಳ್ಳುತ್ತಾರೆ.

**ಪ್ರಶ್ನೆ: ತರಗತಿಯಲ್ಲಿ ಶಿಸ್ತು ಬಹಳ ಅಗತ್ಯ ಎಂದು ನೀವೇಕೆ ಭಾವಿಸುತ್ತೀರಿ? ಶಿಕ್ಷಣಕ್ಕೂ ಅದಕ್ಕೂ ಏನು ಸಂಬಂಧ? ಇತ್ತೀಚಿನ ದಿನಗಳಲ್ಲಿ ಮಕ್ಕಳಿಗೆ ಹೊಡೆಯುವುದನ್ನು ನಿಷೇಧಿಸಿರುವ ಬಗ್ಗೆ ನಿಮ್ಮ ಅಭಿಪ್ರಾಯವೇನು?**

ಪ್ರಮೀಳಾ: ಹಿಂದಿನ ಮಕ್ಕಳು ಶಿಸ್ತುಬದ್ಧರಾಗಿದ್ದರು. ಶಿಕ್ಷಕರನ್ನು ಗೌರವಿಸುತ್ತಿದ್ದರು. ಶಿಸ್ತುಬದ್ಧವಾಗಿ ಇರುತ್ತಿದ್ದರು. ಓದಿನ ಕಡೆಗೆ ಹೆಚ್ಚು ಗಮನಹರಿಸುತ್ತಿದ್ದರು. ಸಮಯಕ್ಕೆ ಸರಿಯಾಗಿ ಶಾಲೆಗೆ ಬಂದು ಹೋಗುತ್ತಿದ್ದರು.

ಮಕ್ಕಳಿಗೆ ಹೊಡೆಯದಂತೆ ಸರಕಾರವು ವಿಧಿಸಿದ ನಿಷೇಧವು ಒಂದು ಲೆಕ್ಕದಲ್ಲಿ ಸರಿಯಾಗಿದೆ, ಇನ್ನೊಂದೆಡೆ ಸರಿಯಾಗಿಲ್ಲ ಎಂದು ನಾನು ಭಾವಿಸುತ್ತೇನೆ. ಮಕ್ಕಳಿಗೆ ಒಂದಿಷ್ಟು ಶಿಸ್ತು ಇರುವುದು ಅನಿವಾರ್ಯವೂ ಹೌದು. ಏಕೆಂದರೆ ಮಕ್ಕಳು ಸ್ವಲ್ಪ ಹೆದರಿಕೆಯಿಂದ, ಸ್ವಲ್ಪ ಶಿಕ್ಷಕರ ಭಯದಿಂದ ಒಂದಿಷ್ಟು ಶಿಸ್ತುಬದ್ಧರಾಗುತ್ತಾರೆ. ಈಗ ಏನಿದೆ ನೋಡಿ. ಸ್ವಲ್ಪವೂ ಭಯವಿಲ್ಲ. ಟೀಚರ್ ನಮಗೇನು ಮಾಡಬಲ್ಲರು ಎಂದು ಅವರೀಗ ಯೋಚಿಸುತ್ತಾರೆ. ಹಾಗೆ ಮಾಡಿದರೆ ನಾವು ದೂರು ಕೊಡುತ್ತೇವೆ ಎಂದುಕೊಳ್ಳುತ್ತಾರೆ. ಟೀಚರ್ ಏನಾದರೂ ನನಗೆ ಹೊಡೆದರೆ, ಏನಾದರೂ ಮಾಡಿದರೆ ಅಥವಾ ಶಿಕ್ಷೆ ಕೊಟ್ಟರೆ ಆಗ ನೇರವಾಗಿ ದೂರುಕೊಟ್ಟುಬಿಡುತ್ತೇನೆ ಎಂಬುದೀಗ ಅವರ ತಲೆಯಲ್ಲಿ ಕುಳಿತುಬಿಟ್ಟಿದೆ. ಹೀಗಾಗಿ ಈಗಿನ ಮಕ್ಕಳ ಮನಸ್ಸಿನಲ್ಲಿ ಭಯ ಮಾಯವಾಗಿದೆ. ಬದಲಿಗೆ  ಶಿಕ್ಷಕರೇ ಈಗ ಹೆದರುತ್ತಾರೆ. ಈಗ ಮಕ್ಕಳು ಉದ್ಧಟತನ ಮಾಡಿದರೂ ಶಿಕ್ಷಕರು ಏನೂ ಮಾಡುವಂತಿಲ್ಲ. ಇಷ್ಟೇ ಹೇಳಬಲ್ಲೆ, ಸುಮ್ಮನೆ ಹೋಗಿ, ಕುಳಿತುಕೊಳ್ಳಿ ಅಷ್ಟೇ. ಕೆಲವು ಮಕ್ಕಳಂತೂ ಎಷ್ಟು ಉದ್ಧಟರಾಗಿರುತ್ತಾರೆಂದರೆ ಬೈದರೂ ದಾರಿಗೆ ಬರುವುದಿಲ್ಲ. ಅಂಥವರನ್ನು ಏನು ಮಾಡೋಣ. ಅಂದರೆ ಎರಡೂ ಕಡೆಯಿಂದಲೂ ಶಿಕ್ಷಕಿಯರಿಗೆ ತೊಂದರೆಯಾಗಿದೆಯಲ್ಲವೇ? ಪರಿಸ್ಥಿತಿ ಹೇಗಿದೆಯೆಂದರೆ ಮಾಡೋಣವೆಂದರೂ ಮಾಡುವುದಾದರೂ ಏನನ್ನು ಎಂಬಂತಾಗಿದೆ. ಇತ್ತೀಚೆಗೆ ಈ ಬಗ್ಗೆ ಪತ್ರಿಕೆಗಳಲ್ಲೂ ಬರುತ್ತಿರುವುದನ್ನು ನೀವು ಗಮನಿಸಿರಬಹುದು. ಹೀಗಾಗಿ ಈ ಸನ್ನಿವೇಶದಲ್ಲಿ ನಾವಾದರೂ ಏನು ಮಾಡುವುದು ಹೇಳಿ. ಏನೂ ಮಾಡಲಾಗದು. ಏಕೆಂದರೆ ಶಿಕ್ಷಕರು ಸರಕಾರದ ಅಧೀನದಲ್ಲಿ ಇರುತ್ತಾರೆ. ಹೀಗಾಗಿ ಮಕ್ಕಳು ಉದ್ಧಟರಾಗುತ್ತಲೇ ಇದ್ದಾರೆ.

**ಪ್ರಶ್ನೆ: ನಿಮ್ಮ ಸಹಶಿಕ್ಷಕರೊಂದಿಗಿನ ನಿಮ್ಮ ಅನುಭವದ ಬಗ್ಗೆ ನಮಗೆ ತಿಳಿಸಬಹುದೆ .**

ಪ್ರಮೀಳಾಃ ನಾನಾಗ ಸೆಕ್ಯುರಿಟಿ ಲೈನ್‌ನ ಮಾಧ್ಯಮಿಕ ಶಾಲೆಯಲ್ಲಿ ಶಿಕ್ಷಕಿಯಾಗಿದ್ದೆ. ನನಗೆ ಆರನೇ ಮತ್ತು  ಏಳನೇ ತರಗತಿಯಲ್ಲಿ ಕಲಿಸುವ ಅವಕಾಶ ಸಿಕ್ಕಿತ್ತು. ಆಗ ನಾನು ಗಣಿತ ಹಾಗೂ ಸಮಾಜಶಾಸ್ತ್ರವನ್ನು ಕಲಿಸುತ್ತಿದ್ದೆ. ನನಗೆ ಗಣಿತ ಅಷ್ಟೊಂದು ಬರುತ್ತಿರಲಿಲ್ಲ. ನನ್ನ ಹಳೆಯ ಕಾಲದಲ್ಲಿ ನಾನು ತೊಲವೀಸೆ-ಮಣ-ಗುಂಜಿರತ್ತಿ ಯಲ್ಲಿ ಕಲಿತಿದ್ದೆಯಾದ್ದರಿಂದ ಗಣಿತ ವಿಷಯವು  ನನಗೆ ತುಂಬ ಕಠಿಣ ಎನ್ನಿಸುತ್ತಿತ್ತು.

ನಮ್ಮಲ್ಲೊಬ್ಬರು ಮೇಡಂ ಇದ್ದರು. ಲಾಲ್ ಮೇಡಂ ಅಂತ. ಅವರು ದಕ್ಷಿಣದವರು. ಅವರು ಎಂಟನೇ ತರಗತಿಯ ಗಣಿತದ ಶಿಕ್ಷಕಿಯಾಗಿದ್ದರು. ಅವರಿಂದ ನಾನು ಆರನೇ ತರಗತಿಯ ಗಣಿತವನ್ನು (ಬೀಜ ಗಣಿತ) ಕಲಿತುಕೊಂಡಿದ್ದೆ. (ನಾನು ಹೇಳುತ್ತಿದ್ದೆ), ಮೇಡಂ ನನಗೆ ಗಣಿತ ಕಲಿಸಿಕೊಡಿ. ನನಗೆ ಗಣಿತ ಕಲಿಸಲು ತುಂಬ ಆಸಕ್ತಿ ಉಂಟಾಗುತ್ತಿದೆ.ಆದರೆ ನನಗೆ ಕಷ್ಟ ಅನ್ನಿಸುತ್ತಿದೆ ಎಂದು ಹೇಳುತ್ತಿದ್ದೆ.   ಅವರು ನನಗೆ ಒಂದೊಂದಾಗಿ ಹೀಗೆ ಹೀಗೆ ಎಂದು  ಎಲ್ಲವನ್ನೂ ಹೇಳಿಕೊಡುತ್ತಿದ್ದರು. ಹೀಗೆ ಅವರನ್ನು ಕೇಳಿ ಕೇಳಿ ನಾನು ಕೂಡ ಕಲಿಸಿಕೊಡುತ್ತಿದ್ದೆ. ಈ ರೀತಿ ಆ ವಿಷಯವು ನನಗೆ ಬಹಳ ಇಷ್ಟವಾಗತೊಡಗಿತ್ತು.

**ಪ್ರಶ್ನೆ: ನಿಮ್ಮ ಶೈಕ್ಷಣಿಕ ವೃತ್ತಿಜೀವನದಲ್ಲಿ ನೀವು ಯಾವ ರೀತಿಯ ತರಬೇತಿಯನ್ನು ಪಡೆದಿರುವಿರಿ? ಈ ತರಬೇತಿಗಳು ಹೇಗಿದ್ದವು? ಅವು ನಿಮ್ಮ ವೃತ್ತಿಗೆ ಅದ್ಯಾವ ರೀತಿಯಲ್ಲಿ ಉಪಯುಕ್ತವಾಗಿವೆ? ನಿಮ್ಮ ಕಾಲದ ತರಬೇತಿ ಮತ್ತು ಈಗ ನಿಮ್ಮ ಬಳಿ ಬರುವ ಡಿ.ಎಡ್. ಆಗಿರುವ ವಿದ್ಯಾರ್ಥಿಗಳ ತರಬೇತಿಯಲ್ಲಿ ನೀವು ಯಾವ ವ್ಯತ್ಯಾಸವನ್ನು ಗಮನಿಸಿರುವಿರಿ?**

ಪ್ರಮೀಳಾಃ ನನ್ನ ಶಿಕ್ಷಣದ ಅವಧಿಯಲ್ಲಿ ನಾನು ಇಂಗ್ಲಿಷ್, ಹಿಂದಿ, ಸಮಾಜಶಾಸ್ತ್ರ ಇತ್ಯಾದಿ ಅನೇಕ ತರಬೇತಿಗಳನ್ನು ಪಡೆದುಕೊಂಡಿದ್ದೆ. ತರಬೇತಿ ಇಷ್ಟವಾಗುತ್ತಿತ್ತು. ಅದರಲ್ಲಿ ಬೋಧನೆಯನ್ನು ಆಸಕ್ತಿದಾಯಕವಾಗಿ ಹಾಗೂ ಸರಳ ವಿಧಾನದಲ್ಲಿ ವಿವರಿಸಲು ಸೂಚಿಸಲಾಗುತ್ತದೆ. ಅಲ್ಲಿ ಹೊಸ ಹೊಸ ವಿಚಾರಗಳನ್ನು ಅರಿತುಕೊಳ್ಳುವ ಅವಕಾಶವೂ ಸಿಗುತ್ತದೆ. ನನ್ನ ಕಾಲದ ಅಧ್ಯಯನ ಮತ್ತು ಈಗಿನ ಕಾಲದ ಅಧ್ಯಯನದಲ್ಲಿ ಬಹಳಷ್ಟು ವ್ಯತ್ಯಾಸಗಳಿವೆ. ಹಿಂದಿನ ಅಧ್ಯಯನವು ಸುಲಭವಾಗಿತ್ತು. ಬಹಳ ಬೇಗನೇ ನೆನಪಿಟ್ಟುಕೊಳ್ಳುತ್ತಿದ್ದೆವು. ಈಗಿನ ಮಕ್ಕಳ ಮನಸ್ಸು ಕಲಿಕೆಯಲ್ಲಿ ಕಡಿಮೆ, ಮೊಬೈಲ್ ಹಾಗೂ ಟಿವಿಯಲ್ಲೇ ಹೆಚ್ಚು ಮಗ್ನವಾಗುತ್ತದೆ. ಸಮಯದ ಜೊತೆಜೊತೆಗೆ ಬಹಳಷ್ಟು ಬದಲಾವಣೆಗಳಾಗಿವೆ. ಆಹಾರ- ಪಾನೀಯ, ಬದುಕುವ ರೀತಿ - ಅಭ್ಯಾಸಗಳು, ಪ್ರಯಾಣ - ತಿರುಗಾಟ ಇತ್ಯಾದಿಗಳೂ ಬದಲಾಗಿವೆ. ಈಗೀಗ ಡಿ.ಎಡ್. ಬೇರ್ಪಟ್ಟು ಬೇರೆಯೇ ಆಗುತ್ತಿದೆ.

ಹೊಸ ಹೊಸ ವಿಷಯಗಳ ಬಗ್ಗೆ ಚರ್ಚೆಗಳಾಗುತ್ತವೆ. ಪ್ರಯೋಗಶೀಲತೆಯ ವಿಧಾನಕ್ಕೆ ಹೆಚ್ಚಿನ ಒತ್ತು ನೀಡಲಾಗುತ್ತಿದೆ. ಪ್ರಾಥಮಿಕ ಹಂತದಲ್ಲೂ ಪುಸ್ತಕಗಳು ಪ್ರಾಯೋಗಿಕವಾಗಿವೆ. ಹಿಂದೆಲ್ಲ ಓದು, ಬರಹಕ್ಕೆ ಹೆಚ್ಚು ಒತ್ತು ನೀಡಲಾಗುತ್ತಿತ್ತು, ಆದರೆ ಈಗಿನ ದಿನಮಾನಗಳಲ್ಲಿ ಅದು ಕಡಿಮೆಯಾಗಿದೆ. ಈಗ ಸರಳ ವಿಧಾನದಲ್ಲಿ ಆಟದೊಂದಿಗೆ ಪಾಠವನ್ನು ಕಲಿಸಲು ಹೇಳಲಾಗುತ್ತದೆ. ಮಕ್ಕಳು ಸಹ ಅದು ಆಸಕ್ತಿದಾಯಕವಾಗಿ ಕಾಣುತ್ತದೆ. ಅವರು ಬೇಗನೆ ಕಲಿಯುತ್ತಾರೆ. ಶ್ರದ್ಧೆಯಿಂದ, ಆಸಕ್ತಿಕರವಾಗಿ ಮತ್ತು ಪ್ರಾಮಾಣಿಕತೆಯಿಂದ ಪಾಠ ಮಾಡಿ ಎಂದು ನಮ್ಮ ಬಳಿಗೆ ಬರುವ ಡಿ.ಎಡ್. ವಿದ್ಯಾರ್ಥಿಗಳಿಗೆ ಹೇಳಬಯಸುತ್ತೇನೆ.

**ಪ್ರಶ್ನೆ: ಹೆಡ್ ಮೇಡಂ ಆಗಿ (HM) ನೀವು ಎಷ್ಟು ಆಡಳಿತಾತ್ಮಕ ಕೆಲಸವನ್ನು ಮಾಡಬೇಕಾಗುತ್ತದೆ? ಈ ಕೆಲಸದ ಬಗ್ಗೆ ನಿಮಗೆ ಏನನ್ನಿಸುತ್ತದೆ? ಈ ಕೆಲಸಕ್ಕೆ ಯಾವುದಾದರೂ ರೀತಿಯ ಸಹಕಾರದ ಅಗತ್ಯವಿದೆ ಎಂದು ನೀವು ಭಾವಿಸುತ್ತೀರಾ?**

ಪ್ರಮೀಳಾಃ ಹೆಡ್ ಮೇಡಂ ಆಗಿ ನಾನು ಸಾಕಷ್ಟು ಆಡಳಿತಾತ್ಮಕ ಕೆಲಸಗಳನ್ನು ಮಾಡಬೇಕಾಗುತ್ತದೆ. ಬ್ಯಾಂಕಿನ ಕೆಲಸಗಳು, ಸಂಕುಲ ಕೇಂದ್ರ, ಜನಶಿಕ್ಷಾ ಕೇಂದ್ರ, ಡಯಟ್ ಇತ್ಯಾದಿಗಳಿಗೆ ಭೇಟಿ ನೀಡುವುದು, ಅರ್ಜಿ-ಪ್ರಪತ್ರ ಇತ್ಯಾದಿಗಳನ್ನು ತರುವುದು, ಭರ್ತಿ ಮಾಡುವುದು, ವಿದ್ಯಾರ್ಥಿ ವೇತನ, ಆಧಾರ್ ಲಿಂಕ್ ಮಾಡುವುದು, ಮೌಲ್ಯಮಾಪನ ಮಾಡುವುದು ಇತ್ಯಾದಿ ಕೆಲಸಗಳನ್ನು ಮಾಡಬೇಕಾಗುತ್ತದೆ. ಸಮಯಕ್ಕೆ ಸರಿಯಾಗಿ ಮಕ್ಕಳ ತರಗತಿಗಳನ್ನೂ ತೆಗೆದುಕೊಳ್ಳುತ್ತೇನೆ. ಇದಲ್ಲದೆ ಸಭೆಗಳು, ತರಬೇತಿಗಳಿಗಾಗಿ ಹೊರಗೆ ಹೋಗಬೇಕಾಗುತ್ತದೆ. ಶಿಕ್ಷಣ ಇಲಾಖೆಯಿಂದ ಬರುವ ನಮೂನೆಗಳನ್ನು (ಪ್ರಪತ್ರ) ಭರ್ತಿ ಮಾಡಿ ಸಲ್ಲಿಸಬೇಕಾಗುತ್ತದೆ.

ಇವೆಲ್ಲ ಕೆಲಸಗಳಲ್ಲಿ (ವೃತ್ತಿಪರ)ಕಾರ್ಯಾಲಯದ(office) ಸಹಕಾರ ಇದ್ದಿದ್ದರೆ ಚೆನ್ನಾಗಿರುತ್ತಿತ್ತು. ಏಕೆಂದರೆ ಕೆಲಸವು ತುಂಬಾ ಹೆಚ್ಚಾಗಿದೆ. ನಾನು ಹೆಡ್ ರೀಡರ್ ಮೇಡಂ ಆಗಿದ್ದು ಸಂಬಳ ಹೆಚ್ಚಾಗುತ್ತದೆ ಎನ್ನುವ ಕಾರಣಕ್ಕೆ ಹೊರತು ಬೇರೇನಕ್ಕೂ ಅಲ್ಲ. ಆದರೆ ಅದಕ್ಕೆ ಹೋಲಿಸಿದರೆ ಕೆಲಸ ತುಂಬಾನೇ ಹೆಚ್ಚಿದೆ. ಪ್ರಸ್ತುತ, ನಾವೆಲ್ಲಾ ಶಿಕ್ಷಕರು ಒಟ್ಟಾಗಿಯೇ ಈ ಎಲ್ಲಾ ಕೆಲಸವನ್ನು ನಿರ್ವಹಿಸುತ್ತಿದ್ದೇವೆ. ಈ ನಿಟ್ಟಿನಲ್ಲಿ ಎಲ್ಲ ಶಿಕ್ಷಕರ ಸಹಕಾರವೂ ಕೂಡ ಸಿಗುತ್ತಿದೆ.